# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **1218**

ಸದಸ್ಯರ ಹೆಸರು : ಶ್ರೀ. ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ದಿನಾಂಕ : 07.03.2022

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಾಥಮಿಕ ಶಾಲೆಯಿಂದ ಪ್ರೌಢಶಾಲೆಗೆ, ಪ್ರೌಢಶಾಲೆಯಿಂದ ಪದವಿ ಪೂರ್ವ ಕಾಲೇಜಿಗೆ ಬಡ್ತಿ ಪಡೆದ ಶಿಕ್ಷಕರಿಗೆ ಉಂಟಾಗಿರುವ ವೇತನ ನಷ್ಟವನ್ನು ಸರಿದೂಗಿಸುವಂತೆ 6ನೇ ವೇತನ ಆಯೋಗದ ಸಮಿತಿ ಶಿಫಾರಸ್ಸು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | • .ಹೌದು ಬಂದಿದೆ.<br>• ಆದರೆ, ರಾಜ್ಯ 6ನೇ ವೇತನ ಆಯೋಗದ 2ನೇ ಸಂಪುಟದ ವರದಿಯ ಶಿಫಾರಸ್ಸನ್ನು ಸರ್ಕಾರದ ಆದೇಶದ ಸಂಖ್ಯೆ:ಆಇ24ಎಸ್ಆರ್ ಪಿ 2018(13) ದಿನಾಂಕ:28-05-2019ರಲ್ಲಿ ತಿರಸ್ಕರಿಸಲಾಗಿದೆ. |
| ಆ | ಬಂದಿದ್ದಲ್ಲಿ, 6ನೇ ವೇತನ ಆಯೋಗದ ಶಿಫಾರಸ್ಸಿನಂತೆ ಆರ್ಥಿಕ ತಾರತಮ್ಯ ಸರಿದೂಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | |
| ಇ | ಸದರಿ ಶಿಫಾರಸ್ಸನ್ನು ಆಧರಿಸಿ, ಇವರಿಗೆ 10,15,20,25 ವರ್ಷಗಳ ಕಾಲಮಿತಿ ಬಡ್ತಿಯನ್ನು ಮಂಜೂರು ಮಾಡಲು ಸರ್ಕಾರ ಚಿಂತಿಸುವುದೇ; | ಕರ್ನಾಟಕ ನಾಗರಿಕ ಸೇವೆಗಳು (ಕಾಲಬದ್ಧ ಮುಂಬಡ್ತಿ) ನಿಯಮಗಳು, 1983 ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ಮುಂಬಡ್ತಿ) ನಿಯಮಗಳು, 1991ರ ನಿಯಮಗಳನ್ವಯ ಸರ್ಕಾರಿ ನೌಕರನಿಗೆ ಕ್ರಮವಾಗಿ 10 ವರ್ಷಗಳ ಮತ್ತು 15 ವರ್ಷಗಳ ಪದೋನ್ನತಿ ರಹಿತ ಸೇವೆಗಾಗಿ ಕಾಲಬದ್ಧ ಮುಂಬಡ್ತಿ ಮತ್ತು ಹಿರಿಯ ವೇತನ ಶ್ರೇಣಿ ಮುಂಬಡ್ತಿ ಸೌಲಭ್ಯಗಳನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸ ಲಾಗಿರುತ್ತದೆ. ಸದರಿ ನಿಯಮಗಳ ಪ್ರಕಾರ ಕಾಲಬದ್ಧ ಮುಂಬಡ್ತಿ ಮತ್ತು ಹಿರಿಯ ವೇತನ ಶ್ರೇಣಿ |

| | | |
|---|---|---|
| | | ಮುಂಬಡ್ತಿ ಸೌಲಭ್ಯಗಳನ್ನು ಸರ್ಕಾರಿ ನೌಕರರಿಗೆ ಅವರ ಸೇವೆಯಾದ್ಯಂತ ಒಂದು ಬಾರಿಗೆ ಮಾತ್ರ ಮಂಜೂರು ಮಾಡಲು ಅವಕಾಶವಿರುತ್ತದೆ.<br><br>ಆದ್ದರಿಂದ, ಪ್ರಾಥಮಿಕ ಶಾಲಾ ಶಿಕ್ಷಕರ ವೃಂದದಲ್ಲಿ 10 ವರ್ಷಗಳ ಸೇವೆಗಾಗಿ ಕಾಲಬದ್ಧ ಮುಂಬಡ್ತಿ ಸೌಲಭ್ಯ ಪಡೆದ ನಂತರ ಕೆ.ಪಿ.ಎಸ್.ಸಿ ಮೂಲಕ ಪ್ರೌಢ ಶಾಲೆಯ ಮುಖ್ಯ ಶಿಕ್ಷಕರಾಗಿ ನೇಮಕಾತಿ ಹೊಂದಿದ ನಂತರ, ಸದರಿ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸಿದಲ್ಲಿ, ಹಿರಿಯ ವೇತನ ಶ್ರೇಣಿ ಮುಂಬಡ್ತಿ ಸೌಲಭ್ಯಗಳನ್ನು ನಿಯಮಗಳಲ್ಲಿನ ಅವಕಾಶಗಳ ಪೂರೈಕೆಗೊಳಪಟ್ಟು ಮಂಜೂರು ಮಾಡಬಹುದಾಗಿರುತ್ತದೆ.<br><br>ಸರ್ಕಾರದ ನೀತಿಯಂತೆ, ಸರ್ಕಾರಿ ನೌಕರರು ಅವರ ಸೇವೆಯಾದ್ಯಂತ ಕನಿಷ್ಠ ಒಂದೂ ಪದೋನ್ನತಿ ಪಡೆಯದೇ ಒಂದೇ ವೃಂದದಲ್ಲಿ 20 ವರ್ಷಗಳು, 25 ವರ್ಷಗಳು ಮತ್ತು 30 ವರ್ಷಗಳು ಸೇವೆಯನ್ನು ಪೂರೈಸಿದ್ದಲ್ಲಿ ಮಾತ್ರ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ನಿಯಮಗಳ ನಿಬಂಧನೆಗಳ ಪೂರೈಕೆಗೊಳಪಟ್ಟು ಮಂಜೂರು ಮಾಡಲು ಅವಕಾಶವಿರುತ್ತದೆ. |
| ಈ | ಯಾವ ಕಾಲಮಿತಿಯಲ್ಲಿ ವೇತನ ನಷ್ಟವನ್ನು ಭರಸಲು ಕ್ರಮ ಕೈಗೊಳ್ಳಲಾಗುವುದು? | ಮೇಲಿನ ಉತ್ತರದಿಂದಾಗಿ ಉದ್ಭವಿಸುವುದಿಲ್ಲ. |

ಸಂಖ್ಯೆ: ಇಪಿ 40 ಎಸ್‌ಓಹೆಚ್ 2022

(ಬಿ.ಸಿ ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು